166(A)

# ಕರ್ನಾಟಕ ವಿಧಾನಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 183
ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್
ವಿಷಯ : ಸರ್ಕಾರಿ ಕಛೇರಿಗಳ ವೆಬ್‌ಸೈಟ್ ನಿರ್ವಹಣೆ ಕುರಿತು
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು
ಉತ್ತರಿಸುವ ದಿನಾಂಕ : 07-12-2020

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಸರ್ಕಾರಿ ಇಲಾಖೆಯ ವೆಬ್‌ಸೈಟ್‌ಗಳ ನಿರ್ವಹಣೆಯನ್ನು ಯಾವ ಸಂಸ್ಥೆ ನಿರ್ವಹಿಸುತ್ತಿದೆ. | ಸರ್ಕಾರಿ ವೆಬ್‌ಸೈಟ್‌ಗಳ ನಿರ್ವಹಣೆಯು ವಿಕೇಂದ್ರಿಕೃತವಾಗಿರುತ್ತದೆ. ಇ-ಆಡಳಿತ ಕೇಂದ್ರದಿಂದ 136 ಜಾಲತಾಣಗಳು, ಎನ್.ಐ.ಸಿಯಿಂದ 168 ಜಾಲತಾಣಗಳು, ಖಾಸಗಿ ಸಂಸ್ಥೆಗಳಿಂದ 100ಕ್ಕೂ ಹೆಚ್ಚು ಜಾಲತಾಣಗಳು ಹಾಗೂ ಕೆಎಂಡಿಸಿಯಿಂದ ನಗರಾಭಿವೃದ್ಧಿ ಇಲಾಖೆಗೆ ಸಂಬಂಧಿಸಿದ 430 ಜಾಲತಾಣಗಳನ್ನು ನಿರ್ವಹಿಸಲಾಗುತ್ತಿದೆ. |
| ಆ) | ಇತ್ತೀಚಿನ ದಿನಗಳಲ್ಲಿ ಸರ್ಕಾರಿ ಇಲಾಖೆಯ ವೆಬ್‌ಸೈಟ್‌ಗಳು ಅಯಾ ಸಂದರ್ಭಕ್ಕೆ ತಕ್ಕಂತೆ ಅಪ್‌ಡೆಟ್ ಆಗದೆ ಹಳೆಯ ಮಾಹಿತಿಯನ್ನೇ ಹೊಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಇ-ಆಡಳಿತ ಕೇಂದ್ರದಲ್ಲಿ ನಿರ್ವಹಿಸುತ್ತಿರುವ ಜಾಲತಾಣದಲ್ಲಿ ಗಂಭೀರ ಕ್ರಮಗಳನ್ನು ಕೈಗೊಳ್ಳಲಾಗಿದೆ. ಎಲ್ಲಾ ಜಾಲತಾಣಗಳ ಮಾಲೀಕತ್ವವನ್ನು ಆಯಾ ಇಲಾಖೆಗೆ ವಹಿಸಲಾಗಿದೆ ಮತ್ತು ಮಾಹಿತಿಯಲ್ಲಿ ದೋಷಗಳು ಉಂಟಾಗದಂತೆ ಹಾಗೂ ಕಾಲ ಕಾಲಕ್ಕೆ ಅಪ್‌ಡೇಟ್ ಮಾಡಲು ಓರ್ವ ನೋಡಲ್ ಅಧಿಕಾರಿಯನ್ನು ಆಯಾಯ ಇಲಾಖೆಯಲ್ಲೇ ನೇಮಕ ಮಾಡಿಕೊಳ್ಳಲಾಗಿರುತ್ತದೆ.<br><br>GIGW, Accessibility ಮಾರ್ಗಸೂಚಿಗಳು ಹಾಗೂ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಶಿಫಾರಸ್ಸುಗಳನ್ನು ಒಳಗೊಂಡ ಮಾದರಿ ವಿನ್ಯಾಸವನ್ನು ಜಾಲತಾಣಗಳನ್ನು ಇ-ಆಡಳಿತ ಕೇಂದ್ರವು ಸೃಜಿಸಿದ್ದು, ಎಲ್ಲಾ ಇಲಾಖೆಗಳ ಜಾಲತಾಣಗಳನ್ನು ಈ ವಿನ್ಯಾಸದಡಿ ತರುವ ಕಾರ್ಯವು ಪ್ರಗತಿಯಲ್ಲಿದೆ.<br><br>ಈಗಾಗಲೇ 182 ಇಲಾಖೆ ಜಾಲತಾಣಗಳನ್ನು ಸದರಿ ನೂತನ ಮಾದರಿ ವಿನ್ಯಾಸದಲ್ಲಿ ಅಳವಡಿಸಿ ಹೋಸ್ಟ್ ಮಾಡಲಾಗಿದ್ದು 'ಇ-ಆಡಳಿತ ಕೇಂದ್ರವು' ಅವುಗಳನ್ನು ನಿರ್ವಹಿಸುತ್ತಿದೆ. ಈ ಜಾಲತಾಣಗಳು ಎಲ್ಲಾ ರೀತಿಯಿಂದಲೂ ಪರಿಪೂರ್ಣವಾಗಿ ಕಾರ್ಯನಿರ್ವಹಿಸುತ್ತಿದೆ.<br><br>ಜಾಲತಾಣಗಳ ತಾಂತ್ರಿಕ ನಿರ್ವಹಣೆಯೊಂದಿಗೆ ಆಯಾಯ ಇಲಾಖಾ ಸಿಬಂಬ್ಬದಿಗಳಿಗೆ ಇ-ಆಡಳಿತ ಕೇಂದ್ರವು ತರಬೇತಿಯನ್ನು ನೀಡುತ್ತಿದೆ. |

| | | |
|---|---|---|
| ಇ) | ಇತ್ತೀಚಿನ ದಿನಗಳಲ್ಲಿ ಇಲಾಖೆಗಳಲ್ಲಿ ಸಾಮಾಜಿಕ ಜಾಲತಾಣಗಳಾದ ಟ್ವಿಟರ್, ಇನ್ಸ್ಟಾಗ್ರಾಂ, ವಾಟ್ಸಾಪ್ ಮತ್ತು ಫೇಸ್‌ಬುಕ್ ಬಳಕೆಯ ಮೂಲಕ ಕಾಗದ ರಹಿತ ಆಡಳಿತವನ್ನು ಸುಗಮಗೊಳಿಸಲು ಸರ್ಕಾರ **ಕೈ**ಗೊಂಡ ಕ್ರಮಗಳಾವುವು: | ಇಲಾಖೆಗಳಲ್ಲಿ ಕಾಗದ ರಹಿತ ಆಡಳಿತಕ್ಕಾಗಿ ಸಾಮಾಜಿಕ ಜಾಲತಾಣಗಳಾದ ಟ್ವಿಟರ್, ಇನ್ಸ್ಟಾಗ್ರಾಂ, ವಾಟ್ಸಾಪ್ ಮತ್ತು ಫೇಸ್‌ಬುಕ್ ಬಳಕೆಯು ಸರ್ಕಾರಿ ಇಲಾಖೆಗಳಲ್ಲಿ ಜಾರಿ ಇರುವುದಿಲ್ಲ.<br><br>ಆದಾಗ್ಯೂ, ಇಲಾಖೆಗಳ ಕಡತ ನಿರ್ವಹಣೆಗಾಗಿ ಇ-ಕಛೇರಿ ತಂತ್ರಾಂಶವನ್ನು ಕರ್ನಾಟಕ ಸರ್ಕಾರದ ಸಚಿವಾಲಯ, ಇಲಾಖಾ ಮುಖ್ಯಸ್ಥರ ಕಛೇರಿಗಳು, ಜಿಲ್ಲಾಧಿಕಾರಿಗಳ ಕಛೇರಿಗಳು, ಜಿಲ್ಲಾ ಪಂಚಾಯತ್‌ಗಳು ಹಾಗೂ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಗಳು ಸೇರಿದಂತೆ ಒಟ್ಟು 457 ಕಛೇರಿಗಳಲ್ಲಿ ಕಾಗದ ರಹಿತ ಆಡಳಿತವನ್ನು ಅನುಷ್ಠಾನಗೊಳಿಸಲಾಗಿದೆ.<br><br>ಮುಂದುವರೆದು, ತಾಲ್ಲೂಕು ಪಂಚಾಯತ್‌ಗಳು, ತಹಶೀಲ್ದಾರ್ ಕಛೇರಿಗಳು ಸೇರಿದಂತೆ ಇನ್ನಿತರ ಜಿಲ್ಲಾ/ತಾಲ್ಲೂಕು ಮಟ್ಟದ ಕಛೇರಿಗಳಲ್ಲಿ ಇ-ಕಛೇರಿ ಅನುಷ್ಠಾನ ಪ್ರಕ್ರಿಯೆಯು ಪ್ರಗತಿಯಲ್ಲಿದೆ. |
| ಈ) | ಸರ್ಕಾರಿ ಕಛೇರಿಗಳಲ್ಲಿ ಇ-ಆಡಳಿತ ವ್ಯವಸ್ಥೆಯಿದ್ದು ಸರ್ವರ್ ಸಮಸ್ಯೆಯಿಂದ ಸದರಿ ವ್ಯವಸ್ಥೆಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | 271 ಇಲಾಖೆಗಳ ತಂತ್ರಾಂಶ / ಅಪ್ಲಿಕೇಶನ್‌ಗಳನ್ನು ಕರ್ನಾಟಕ ರಾಜ್ಯ ದತ್ತಾಂಶ ಕೇಂದ್ರ ಹೋಸ್ಟ್ ಮಾಡಲಾಗಿದೆ. ಸದರಿ ಅಪ್ಲಿಕೇಶನ್‌ಗಳಿಗೆ ಸಂಬಂಧಿಸಿದ ಸರ್ವರ್‌ಗಳ ಕಾರ್ಯಚರಣೆಗಳನ್ನು ದಿನದ 24 ಘಂಟೆಗಳ ಕಾಲ ಮೇಲ್ವಿಚಾರಣೆ ಮಾಡಲಾಗುತ್ತಿದ್ದು, ಸರ್ವರ್ ಸಮಸ್ಯೆಗಳು ಅಪರೂಪವಾಗಿ ಬರುತ್ತದೆ. ಬಂದಲ್ಲಿ ಆ ತಕ್ಷಣವೇ ಕ್ರಮ ಕೈಗೊಂಡು ಸರಿಪಡಿಸಲಾಗುತ್ತಿದೆ. ಅಪ್ಲಿಕೇಶನ್ / ಜಾಲತಾಣ ನಿರ್ವಹಣೆ ಸಮಸ್ಯೆಗಳು ಎದುರಾದಲ್ಲಿ ಅದನ್ನು ಸಂಬಂಧಿಸಿದ ಇಲಾಖೆಗಳೇ ಸರಿ ಪಡಿಸಿಕೊಳ್ಳಬೇಕಾಗುತ್ತದೆ. |

ಇ-ಕಡತ ಸಂಖ್ಯೆ:ಸಿಆಸುಇ 43 ಇಜಿಆರ್ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ